# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| 1) | **ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** | 2018 |
| 2) | **ಸದಸ್ಯರ ಹೆಸರು** | ಶ್ರೀ ಘೋಟ್ನೇಕರ ಶ್ರೀಕಾಂತ ಲಕ್ಷ್ಮಣ (ವಿಧಾನ ಸಭೆಯಿಂದ ಚುನಾಯಿತರಾದವರು) |
| 3) | **ಉತ್ತರಿಸಬೇಕಾದ ದಿನಾಂಕ** | 24-03-2021 |
| 4) | **ಉತ್ತರಿಸಬೇಕಾದ ಸಚಿವರು** | ಮೀನುಗಾರಿಕೆ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು |

| | ಪ್ರಶ್ನೆ | ಉತ್ತರ |
|---|---|---|
| ಅ) | 2019-20ನೇ ಸಾಲಿನಲ್ಲಿ ಕಾರವಾರ ಜಿಲ್ಲೆಯಲ್ಲಿ ಮೀನುಗಾರಿಕೆ ಇಲಾಖೆ ವತಿಯಿಂದ ಮೀನು ಮರಿಗಳನ್ನು ಕೆರೆಗಳಲ್ಲಿ ಸಾಕಾಣೆ ಮಾಡಲು ಅನುಸರಿಸಲಾಗಿರುವ ಕ್ರಮಗಳೇನು; (ಸಂಪೂರ್ಣ ಮಾಹಿತಿ ನೀಡುವುದು) | ಕಾರವಾರ ಜಿಲ್ಲೆಯಲ್ಲಿ 86 ಇಲಾಖಾ ಕೆರೆಗಳು ಹಾಗೂ 08 ಜಲಾಶಯಗಳಿದ್ದು, ಈ ಪೈಕಿ 2019-20ನೇ ಸಾಲಿನಲ್ಲಿ 84 ಇಲಾಖಾ ಕೆರೆಗಳ ಮೀನು ಪಾಶುವಾರು ಹಕ್ಕನ್ನು ಗುತ್ತಿಗೆ/ಟೆಂಡರ್-ಕಂ-ಹರಾಜು ಮೂಲಕ ಹಾಗೂ ಧರ್ಮ ಜಲಾಶಯವನ್ನು ಪರವಾನಗಿ ನೀಡುವುದರ ಮೂಲಕ ವಿಲೇವಾರಿ ಮಾಡಲಾಗಿರುತ್ತದೆ. ಮೀನು ಪಾಶುವಾರು ಹಕ್ಕನ್ನು ಪಡೆದ ಯಶಸ್ವಿ ಬಿಡ್‌ದಾರರು ಇಲಾಖಾ ಗುತ್ತಿಗೆ ನಿಯಮಾವಳಿ 2014ರ ಅನುಬಂಧ-14 ಕಂಡಿಕೆ-14ರಂತೆ ಕೆರೆಗಳಲ್ಲಿ ಬಿತ್ತನೆ ಮೀನುಮರಿಗಳನ್ನು ಬಿತ್ತನೆ ಮಾಡಿ ಸಾಕಾಣಿಕೆ ಮಾಡುತ್ತಿರುತ್ತಾರೆ. ಪರವಾನಗಿ ನೀಡುವ ಜಲಾಶಯಗಳಲ್ಲಿ ಇಲಾಖಾ ವತಿಯಿಂದ ಬಲಿತ ಬಿತ್ತನೆ ಮೀನುಮರಿಗಳನ್ನು ಹಾಗೂ ಜಿಲ್ಲಾ ಪಂಚಾಯತ್ ಕಾರ್ಯಕ್ರಮದಡಿ ಬಿತ್ತನೆ ಮೀನುಮರಿಗಳನ್ನು ದಾಸ್ತಾನು ಮಾಡಲಾಗುತ್ತಿದ್ದು, 2019-20ನೇ ಸಾಲಿನಲ್ಲಿ ಮುಂಡಗೋಡ ತಾಲ್ಲೂಕಿನ ಧರ್ಮ ಜಲಾಶಯದಲ್ಲಿ ರಾಜ್ಯ ವಲಯದ ಜಲಾಶಯ ಅಭಿವೃದ್ಧಿ ಕಾರ್ಯಕ್ರಮದಡಿ 1.55 ಲಕ್ಷ ಬಲಿತ ಬಿತ್ತನೆ ಮೀನುಮರಿ ಹಾಗೂ ಜಿಲ್ಲಾ ಪಂಚಾಯತ್ ಕಾರ್ಯಕ್ರಮದಡಿ 3.70 ಲಕ್ಷ ಬಿತ್ತನೆ ಮೀನುಮರಿಗಳನ್ನು ದಾಸ್ತಾನು ಮಾಡಿ, ಮೀನು ಸಾಕಾಣಿಕೆ ಮಾಡಲಾಗಿರುತ್ತದೆ.<br><br>ಸ್ವಂತ ಕೆರೆಗಳಲ್ಲಿಯೂ ಸಹ ಮೀನು ಸಾಕಾಣಿಕೆ ಕೈಗೊಳ್ಳಲು ಇಲಾಖಾ ವತಿಯಿಂದ ಮೀನುಮರಿಗಳನ್ನು ನಿಗದಿತ ದರದಲ್ಲಿ ಮಾರಾಟ ಮಾಡಲಾಗುತ್ತಿದೆ. |
| ಆ) | ಕಳೆದ ಮೂರು ವರ್ಷಗಳಿಂದ ಕಾರವಾರ ಜಿಲ್ಲೆಯ ವಿವಿಧ ತಾಲ್ಲೂಕುಗಳಲ್ಲಿ ಕೆರೆಗಳಲ್ಲಿ/ಡ್ಯಾಂ/ಕಟ್ಟೆಗಳಲ್ಲಿ ಮೀನು ಸಾಕಾಣಿಕೆಗಾಗಿ ನೀಡಿರುವ ಅನುದಾನ ವೆಷ್ಟು; (ವರ್ಷವಾರು ಹಾಗೂ ಜಿಲ್ಲಾವಾರು ಸಂಪೂರ್ಣ ವಿವರ ನೀಡುವುದು) | ಕಳೆದ ಮೂರು ವರ್ಷಗಳಿಂದ ಕಾರವಾರ ಜಿಲ್ಲೆಯ ವಿವಿಧ ತಾಲ್ಲೂಕುಗಳಲ್ಲಿ ಕೆರೆಗಳಲ್ಲಿ/ ಡ್ಯಾಂ/ ಕಟ್ಟೆಗಳಲ್ಲಿ ಮೀನು ಸಾಕಾಣಿಕೆಗಾಗಿ ನೀಡಿರುವ ಅನುದಾನದ ವಿವರಗಳು ಕೆಳಕಂಡಂತಿರುತ್ತದೆ:-<br>(ರೂ.ಗಳಲ್ಲಿ) |

| ಕ್ರ. ಸಂ. | ತಾಲ್ಲೂಕು | 2017-18 | 2018-19 | 2019-20 |
|---|---|---|---|---|
| 1 | ಕಾರವಾರ | - | - | - |
| 2 | ಶಿರಸಿ | 24,953 | - | 25,104 |
| 3 | ಸಿದ್ದಾಪುರ | - | - | - |
| 4 | ಮುಂಡಗೋಡ | 2,10,400 | - | 2,52,982 |
| 5 | ಹಳಿಯಾಳ | - | - | 16,336 |
| 6 | ಜೊಯಡಾ | - | - | - |

**ಇ)** ಕಾರವಾರ ಜಿಲ್ಲೆಯ ವಿವಿಧ ತಾಲ್ಲೂಕು ಗಳಲ್ಲಿ ಕಳೆದ ಮೂರು ವರ್ಷಗಳಿಂದ ಎಷ್ಟು ಕೆರೆಗಳಲ್ಲಿ/ಡ್ಯಾಂ/ ಕಟ್ಟೆಗಳಲ್ಲಿ ಮೀನು ಸಾಕಾಣಿಕೆ ಟೆಂಡರ್ ಕರೆಯಲಾಗಿದೆ; (ವರ್ಷವಾರು ಹಾಗೂ ತಾಲ್ಲೂಕುವಾರು ಸಂಪೂರ್ಣ ಮಾಹಿತಿ ನೀಡುವುದು)

ಕಾರವಾರ ಜಿಲ್ಲೆಯ ವಿವಿಧ ತಾಲ್ಲೂಕುಗಳಲ್ಲಿ ಕಳೆದ ಮೂರು ವರ್ಷಗಳಲ್ಲಿ ಕೆರೆಗಳಲ್ಲಿ/ಡ್ಯಾಂ/ಕಟ್ಟೆಗಳಲ್ಲಿ ಮೀನು ಸಾಕಾಣಿಕೆ ಸಂಬಂಧ ಟೆಂಡರ್ ಕರೆಯಲಾದ ವರ್ಷವಾರು ಹಾಗೂ ತಾಲ್ಲೂಕುವಾರು ಸಂಪೂರ್ಣ ಮಾಹಿತಿಗಳನ್ನು ಕೆಳಕಂಡಂತೆ ನೀಡಲಾಗಿದೆ.

| ಕ್ರ. ಸಂ | ತಾಲ್ಲೂಕು | 2017-18 | 2018-19 | 2019-20 |
|---|---|---|---|---|
| 1 | ಕಾರವಾರ | 02 | 02 | 02 |
| 2 | ಶಿರಸಿ | 17 | 17 | 17 |
| 3 | ಸಿದ್ದಾಪುರ | 02 | 02 | 02 |
| 4 | ಮುಂಡಗೋಡ | 26 | 26 | 26 |
| 5 | ಹಳಿಯಾಳ | 33 | 30 | 35 |
| 6 | ಜೊಯಡಾ | 02 | 02 | 02 |

**ಈ)** ಈ ಅವಧಿಯಲ್ಲಿ ಮೀನು ಸಾಕಾಣಿಕೆಗಾಗಿ ಸರ್ಕಾರದಿಂದ ಯಾವ ಯಾವ ಯೋಜನೆ ಗಳಲ್ಲಿ ಎಷ್ಟೆಷ್ಟು ಅನುದಾನವನ್ನು ನೀಡಲಾಗಿದೆ; (ವರ್ಷವಾರು ಹಾಗೂ ಕಾರವಾರ ಜಿಲ್ಲೆಯ ತಾಲ್ಲೂಕುವಾರು ಸಂಪೂರ್ಣ ಮಾಹಿತಿ ನೀಡುವುದು)

ಈ ಅವಧಿಯಲ್ಲಿ ಮೀನು ಸಾಕಾಣಿಕೆಗಾಗಿ ಜಾರಿಗೊಳಿಸಲಾದ ಯೋಜನೆಗಳಿಗೆ ವರ್ಷವಾರು ಹಾಗೂ ಕಾರವಾರ ಜಿಲ್ಲೆಯ ತಾಲ್ಲೂಕುವಾರು ಸಂಪೂರ್ಣ ಮಾಹಿತಿಗಳನ್ನು ಕೆಳಕಂಡಂತೆ ನೀಡಲಾಗಿದೆ.

(ರೂ.ಗಳಲ್ಲಿ)

| ಯೋಜನೆಯ ವಿವರ | ತಾಲ್ಲೂಕು | 2017-18 | 2018-19 | 2019-20 |
|---|---|---|---|---|
| 1) ಒಳನಾಡು ಮೀನುಗಾರಿಕೆ ಅಭಿವೃದ್ಧಿಗೆ ಸಹಾಯಧನ ಯೋಜನೆಯಡಿ ಮೀನುಮರಿ ಖರೀದಿಗೆ ಸಹಾಯಧನ | ಕಾರವಾರ | - | - | - |
| | ಶಿರಸಿ | 34,953 | - | 59,704 |
| | ಸಿದ್ದಾಪುರ | - | - | - |
| | ಮುಂಡಗೋಡ | - | - | 82.382 |
| | ಹಳಿಯಾಳ | - | - | 16,336 |
| | ಜೊಯಡಾ | - | - | - |
| 2) ರಾಜ್ಯ ವಲಯ ಜಲಾಶಯಗಳಲ್ಲಿ ಮೀನುಮರಿ ಬಿತ್ತನೆ | ಕಾರವಾರ | - | - | - |
| | ಶಿರಸಿ | - | - | - |
| | ಸಿದ್ದಾಪುರ | - | - | - |
| | ಮುಂಡಗೋಡ | 2,00,400 | - | 1,36,000 |
| | ಹಳಿಯಾಳ | - | - | - |
| | ಜೊಯಡಾ | - | - | - |

| | | |
|---|---|---|
| ಉ) | ಕಾರವಾರ ಜಿಲ್ಲೆಯಲ್ಲಿ 2019-20ನೇ ಸಾಲಿನಲ್ಲಿ ಮೀನುಗಾರಿಕೆ ಇಲಾಖೆ ವತಿಯಿಂದ ಮತ್ಸ್ಯಾಶ್ರಯ ಯೋಜನೆಯಡಿಯಲ್ಲಿ ಮಂಜೂರು ಮಾಡಲಾಗಿರುವ ಮನೆಗಳೆಷ್ಟು; ಫಲಾನುಭವಿಗಳನ್ನು ಆಯ್ಕೆ ಮಾಡಲು ಅನುಸರಿಸಲಾಗಿರುವ ಮಾನದಂಡಗಳೇನು? (ಕಾರವಾರ ಜಿಲ್ಲೆಯ ತಾಲ್ಲೂಕುವಾರು ಸಂಪೂರ್ಣ ಮಾಹಿತಿ ನೀಡುವುದು) | 2019-20ನೇ ಸಾಲಿನಲ್ಲಿ ಮತ್ಸ್ಯಾಶ್ರಯ ಯೋಜನೆಯಡಿ ಕಾರವಾರ ಜಿಲ್ಲೆಗೆ ಯಾವುದೇ ಮನೆಗಳು ಮಂಜೂರಾಗಿರುವುದಿಲ್ಲ. ಫಲಾನುಭವಿಗಳನ್ನು ಆಯ್ಕೆ ಮಾಡಲು ಈ ಕೆಳಗಿನ ಮಾನದಂಡಗಳನ್ನು ಅನುಸರಿಸಲಾಗುತ್ತಿದೆ:-<br><br>1. ಫಲಾನುಭವಿಯು ಹುಟ್ಟು ವೃತ್ತಿಯಲ್ಲಿ ಮೀನುಗಾರನಾಗಿರಬೇಕು, ಮೀನುಗಾರಿಕೆಗೆ ಪೂರಕವಾದ ಚಟುವಟಿಕೆಗಳಲ್ಲಿ ತೊಡಗಿರುವವರನ್ನು ಸಹ ಆಯ್ಕೆ ಮಾಡಬಹುದಾಗಿದೆ.<br>2. ಫಲಾನುಭವಿಯು ವಿವಾಹಿತನಾಗಿರಬೇಕು.<br>3. ಫಲಾನುಭವಿ ಸ್ವಂತ ನಿವೇಶನ ಹೊಂದಿರತಕ್ಕದ್ದು.<br>4. ಫಲಾನುಭವಿಯು ಸ್ಥಳೀಯ ಮೀನುಗಾರರ ಸಹಕಾರ ಸಂಘದ ಸದಸ್ಯನಾಗಿರಬೇಕು. ಇಲ್ಲದಿದ್ದಲ್ಲಿ, ಕಳೆದ ಮೂರು ವರ್ಷಗಳಿಂದ ಮೀನುಗಾರಿಕೆಯಲ್ಲಿ ತೊಡಗಿರುವ ಬಗ್ಗೆ ಸಂಬಂಧಿಸಿದ ತಾಲ್ಲೂಕು ಮೀನುಗಾರಿಕೆ ಸಹಾಯಕ ನಿರ್ದೇಶಕರು ದೃಢೀಕರಿಸಬೇಕು.<br>5. ಫಲಾನುಭವಿಯು ಸರ್ಕಾರದ ಇತರೆ ವಸತಿ ಯೋಜನೆಯಡಿ ಸೌಲಭ್ಯವನ್ನು ಪಡೆದಿರಬಾರದು ಈ ಬಗ್ಗೆ ಸಂಬಂಧಪಟ್ಟ ಗ್ರಾಮ ಪಂಚಾಯತಿ, ಮುನಿಸಿಪಾಲಿಟಿ, ನಗರಸಭೆ ಮುಂತಾದ ಸಂಸ್ಥೆಗಳಿಂದ ದೃಢೀಕರಣ ಹೊಂದಿರತಕ್ಕದ್ದು.<br>6. ಫಲಾನುಭವಿಯು ಆರ್ಥಿಕವಾಗಿ ಹಿಂದುಳಿದವರಾಗಿರತಕ್ಕದ್ದು. |

ಸಂಖ್ಯೆ: ಪಸಂಮೀ ಇ-120 ಮೀಇಯೋ 2021

(ಎಸ್. ಅಂಗಾರ)
ಮೀನುಗಾರಿಕೆ, ಬಂದರು
ಮತ್ತು ಒಳನಾಡು ಜಲಸಾರಿಗೆ ಸಚಿವರು